# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

8ನೇ ವರ್ಷ 20ನೇ ಸಂಚಿಕೆ ಕೊಪ್ಪ 7-1-1990 ಭಾನುವಾರ ಬೆಲೆ 30 ಪೈಸೆ


## ವಿಶ್ವ ಮಾನವ ದಿನಾಚರಣೆ

ಕೊಪ್ಪ : ರಾಷ್ಟ್ರಕವಿ ಕುವೆಂಪುರವರ ಜನ್ಮದಿನೋತ್ಸವದ ಅಂಗವಾಗಿ ಹಿರೇಕೊಡಿಗೆಯ 'ವಿಶ್ವ ಮಾನವ ಪ್ರತಿಷ್ಠಾನ'ದ ಆಶ್ರಯದಲ್ಲಿ ಡಿ 29ರಂದು ವಿಶ್ವ ಮಾನವ ದಿನಾಚರಣೆ ಜಿ ಡಿ ಪರಮೇಶ್ವರ್ ಅಧ್ಯಕ್ಷತೆಯಲ್ಲಿ ನಡೆಯಿತು.

ಶಾಸಕ ಯು.ಕೆ. ಶಾಮಣ್ಣ, ತಹಸೀಲ್ದಾರ್ ಜಿ.ಎಸ್. ನಾಯಕ್ ಮತ್ತು ಸುಮಿತ್ರಮ್ಮ ಮುಖ್ಯ ಅತಿಥಿಗಳಾಗಿದ್ದರು. ತೀರ್ಥಹಳ್ಳಿ ಕಾಲೇಜ್ ಉಪನ್ಯಾಸಕ ಕೋಗಿ ಶಿವಪ್ಪ ವಿಶ್ವ ಮಾನವ ಸಂದೇಶ ವಾಚನ ಮಾಡಿದರು. ಹೊಸಮನೆ ಸುಬ್ಬಯ್ಯ ನಾಯ್ಕ್ 'ರಾಮಾಯಣ ದರ್ಶನಂ' ಕಾವ್ಯ ವಾಚನ ಮಾಡಿದರು. ಕು|| ವಾಸಂತಿ ಶೆಟ್ಟಿ, ನಾ ರಾಮಮೂರ್ತಿ (ಕೊಪ್ಪ ಬಿಡಿಒ), ಎ.ಆರ್. ಶಶಿರಾಜ್ ಹಾಗೂ ಎಚ್.ಎಸ್. ಗೋಪಾಲ್ ಕುವೆಂಪು ಕವಿತೆಗಳನ್ನು ಹಾಡಿದರು. 'ಕುವೆಂಪು ಕೃತಿಗಳಲ್ಲಿ ಕ್ರಾಂತಿಯ ನೋಟ'— ಈ ವಿಚಾರವಾಗಿ ತೀರ್ಥಹಳ್ಳಿ ಕಾಲೇಜು ಉಪನ್ಯಾಸಕ ತಿಮ್ಮಪ್ಪ ಅವರು ಮಾತನಾಡಿದರು

ಶಾಮಣ್ಣ ಅವರು ಮಾತನಾಡಿ, ವಿಶ್ವ ಮಾನವ ಭವನದ ಕಟ್ಟಡ ಆಗುತ್ತಿದ್ದು, ಅದಕ್ಕೆ ಸಮೀಪಿಸುವ ರಸ್ತೆ ಬೇಕು ಎಂಬ ಬೇಡಿಕೆ ಬಗ್ಗೆ ಪ್ರಸ್ತಾಪಿಸಿ, ಇದಕ್ಕಾಗಿ ಸೂಕ್ತ ಸ್ಥಳ ಒದಗಿಸುವಂತೆ ಹಿರೇಕೊಡಿಗೆಯ ಕೃಷ್ಣಮೂರ್ತಿ ಸೋದರರಿಗೆ ಮನವಿ ಮಾಡಿದರು

ಅಮೃತಿ ನಾಗಪ್ಪನಾಯ್ಕ್ ಮಾತನಾಡಿ ಶಾಮಣ್ಣನವರು ಹಿರೇಕೊಡಿಗೆ ಮನೆಯವರೇ ಆದ ತಮ್ಮ ತಾಯಿ ಅಥವಾ ಅಜ್ಜನ ಹೆಸರಲ್ಲಿ ಇಲ್ಲಿ ಯಾವುದಾದರೊಂದು ಶಾಶ್ವತ ಕೆಲಸವನ್ನು ಮಾಡುವಂತೆ ಮನವಿ ಮಾಡಿದರು.

ಕೋಣೆಗದ್ದೆ ಪದ್ಮನಾಭ್ ಸ್ವಾಗತಿಸಿ, ರಾಘವೇಂದ್ರ ರಾವ್ ವಂದಿಸಿದರು.

## ವಾಲಿಬಾಲ್ ಟೂರ್ನಿ

ಕೊಪ್ಪ : ಇಲ್ಲಿನ ಡೈಮಂಡ್ಸ್ ಯೂತ್ ಕ್ಲಬ್‌ನ 4ನೇ ವಾರ್ಷಿಕೋತ್ಸವದ ಅಂಗವಾಗಿ, ಶೃಂಗೇರಿ, ಕೊಪ್ಪ, ನ. ರಾ. ಪುರ ಮತ್ತು ತೀರ್ಥಹಳ್ಳಿ ತಾ|| ಗಳ ಮಟ್ಟದ ಪುರುಷರ ವಾಲಿಬಾಲ್ ಪಂದ್ಯಾವಳಿ ಜನವರಿ 30 ಮತ್ತು 31 ರಂದು ಪುರಸಭಾ ಕ್ರೀಡಾಂಗಣದಲ್ಲಿ ನಡೆಯಲಿದೆ.

ಪ್ರತಿ ತಂಡಕ್ಕೆ 25 ರೂ. ಪ್ರವೇಶಧನದೊಂದಿಗೆ ನೊಂದಾಯಿಸಲು ಕೊನೇ ದಿನ 29-1-90. ವಿಳಾಸ : ಎಚ್.ಕೆ. ಹಂಸ, ಕ್ಲಬ್‌ನ ಪ್ರಧಾನ ಕಾರ್ಯದರ್ಶಿ, ಅಥವಾ ನಾಗೇಂದ್ರ ಪ್ರಸಾದ್, ಮಧು ವೈನ್ಸ್, ಬಸ್ ಸ್ಟ್ಯಾಂಡ್ ಎದುರು, ಕೊಪ್ಪ.

ಸ್ಪರ್ಧಿಗಳಿಗೆ ಊಟ, ವಸತಿ ವ್ಯವಸ್ಥೆ ಇರುತ್ತದೆ.

# ಜಿ. ಪ. ಅಧ್ಯಕ್ಷರಾಗಿ ಬಿ. ಎಲ್. ರಾಮದಾಸ್

**ಚಿಕ್ಕಮಗಳೂರು ಜಿಲ್ಲಾ ಪರಿಷತ್ತಿನ 3ನೇ ಅಧ್ಯಕ್ಷರಾಗಿ ಕಾಂಗ್ರೆಸ್ (ಐ)ನ ಬಿ ಎಲ್ ರಾಮದಾಸ್ ಜ 4ರಂದು ಆಯ್ಕೆಯಾದರು.**

ರಾಮದಾಸ್ ಹೆಸರನ್ನು ಬಿ ಸಿ. ಗೀತಾ ಸೂಚಿಸಿ, ಐ ಕೆ ಕುಸುಮಾ ಅನುಮೋದಿಸಿದ್ದ ಉಮೇದುವಾರಿಕೆಯನ್ನು ಮತಕ್ಕೆ ಹಾಕಿದಾಗ, ಕಾಂಗ್ರೆಯ ಎಲ್ಲ 21 ಸದಸ್ಯರೂ ಸರ್ವಾನುಮತದಿಂದ ಕೈ ಎತ್ತಿ ಬಹುಮತ ಸಾಬೀತು ಮಾಡಿದರು.

ಜನತಾ ದಳದ ಅಭ್ಯರ್ಥಿಯಾಗಿ ಬಣಕಲ್ ಸೋಮಶೇಖರಪ್ಪ ಕೂಡ ನಾಮಪತ್ರ ಸಲ್ಲಿಸಿದ್ದರಾದರೂ, ರಾಮದಾಸ್‌ಗೆ ಬಹುಮತ ಸಿಕ್ಕ ನಂತರ ಅವರ ಉಮೇದುವಾರಿಕೆಯನ್ನು ಮತಕ್ಕೆ ಹಾಕಲಿಲ್ಲ

**ಒಂದು ವರ್ಷದ ಅವಧಿಗೆ**

ಕಾಂಗ್ರೆಸ್ ಹೈಕಮಾಂಡಿನ ತೀರ್ಮಾನದಂತೆ ರಾಮದಾಸ್‌ರ ಅಧ್ಯಕ್ಷ ಅವಧಿ ಕೇವಲ 1 ವರ್ಷ ಮಾತ್ರ. ಅನಂತರ ಅವರು ರಾಜೀನಾಮೆ ನೀಡಬೇಕು. ನಂತರ ಮುಂದಿನ ಆಯ್ಕೆ ಬಗ್ಗೆ ಮುಖ್ಯಮಂತ್ರಿ ಮತ್ತು ಕೆಪಿಸಿಸಿ ಅಧ್ಯಕ್ಷರು ನಿರ್ಧರಿಸುವರು.

**ಮಾಸ್ತಿ ಅಪಹರಣದ ನಾಟಕ**

ಜ. 3ರಂದು ಮಧ್ಯಾಹ್ನ 12 ಗಂಟೆವರೆಗೆ ಜಿ ಪ. ಅಧ್ಯಕ್ಷತೆಗೆ ನಾಮಪತ್ರ ಸಲ್ಲಿಸಲು ಅವಕಾಶವಿದ್ದು, ಹರಿಜನ ಸದಸ್ಯ ಎಚ್.ಎಂ. ಮಾಸ್ತಿಯವರನ್ನು 'ಅಪಹರಿಸಿ' ಅವರಿಂದ ನಾಮಪತ್ರ ಸಲ್ಲಿಸುವ 'ನಾಟಕ'ವೂ ನಡೆಯಿತು. ಅದರ ಹಿಂದಿನ ರಾತ್ರಿ ಅವರನ್ನು ಮಣಿಪಾಲಕ್ಕೆ ಕರೆದೊಯ್ದು, 'ಉದಯವಾಣಿ' ಪತ್ರಿಕೆಗೆ ಅವರಿಂದ ಹೇಳಿಕೆ ಕೊಡಿಸಿದ್ದಲ್ಲದೆ, ಚಿಕ್ಕಮಗಳೂರಿನಲ್ಲಿ ಪೋಲೀಸರಿಂದ ರಕ್ಷಣೆ ಕೇಳಿಸಿದ್ದೂ ನಡೆಯಿತು. ಮಾಸ್ತಿಯವರನ್ನು ಹೀಗೆ 'ಅಪಹರಿಸಿ' ಅಲೆದಾಡಿಸಿದ ಸುಧಾಕರ್ ಎಂಬ ವ್ಯಕ್ತಿಗೆ ಕೆಲ ಕಾಂಗ್ರೆ ಯುವಕರು ಥಳಿಸುವ ಯತ್ನವೂ ನಡೆಯಿತು.

ಇದಕ್ಕೆಲ್ಲ ಬಿ ಜೆ. ಚಿದಂಬರ್ ಕೈವಾಡ ಕಾರಣ ಎಂಬ ದಟ್ಟ ವದಂತಿಯನ್ನು ಮಾಸ್ತಿ ಮತ್ತು ಕಾಂಗ್ರೆ ಅಧ್ಯಕ್ಷ ಮಲ್ಲಿಕಾರ್ಜುನಯ್ಯ 'ಹಾಗಿರಲಾರದು' ಎಂದು ನಿರಾಕರಿಸಿದ್ದಾರೆ.

## ಕೊಪ್ಪದಲ್ಲಿ ಅಂಬೇಡ್ಕರ್ ಸ್ಮರಣ ದಿನಾಚರಣೆ

ಕೊಪ್ಪ: ತಾ|| ದಲಿತ ಸಂಘರ್ಷ ಸಮಿತಿ ಆಶ್ರಯದಲ್ಲಿ ಡಿ. 31 ರಂದು ಇಲ್ಲಿ ಅಂಬೇಡ್ಕರ್ ಸ್ಮರಣ ದಿನಾಚರಣೆ ನಡೆಯಿತು. ನ. ರಾ. ಪುರದ ಎಚ್. ಮುಳ್ಳಯ್ಯ ಅಧ್ಯಕ್ಷತೆ ವಹಿಸಿದ್ದರು. ಅಂಬೇಡ್ಕರ್ ಜೀವನ ಮತ್ತು ಅವರ ವಿಚಾರಗಳ ಬಗ್ಗೆ ಕಿರಿಯ ಕಾಲೇಜು ಅಧ್ಯಾಪಕ ಎಂ. ಎಸ್. ಲಕ್ಷ್ಮೀನಾರಾಯಣ ವಿವರಿಸಿದರು. ಮುಖ್ಯ ಅತಿಥಿಯಾಗಿದ್ದ ತಹಸೀಲ್ದಾರ್ ಜಿ ಎಸ್. ನಾಯಕ್ ಅಂಬೇಡ್ಕರರ ಕಷ್ಟ ಸಹಿಷ್ಣುತೆ, ಶಿಸ್ತುಬದ್ಧ ಪರಿಶ್ರಮವನ್ನು ವಿವರಿಸಿ, ಮಹಾರಾಷ್ಟ್ರದಲ್ಲಿ ಇಂದು ದಲಿತ್ ಪ್ಯಾಂಥರ್ ಸಂಘಟನೆ ಉಳಿದೆಲ್ಲ ಉಗ್ರ ಜಾತಿವಾದಿ – ಕೋಮುವಾದಿ ಸಂಘಟನೆಗಳಿಗೆ ಸಮ ಸಮನಾಗಿ ಬೆಳೆದು ನಿಂತಿರುವಂತೆ ಇಲ್ಲೂ ದಲಿತ ಸಂಘಟನೆ ಬೆಳೆಯಲೆಂದು ಆಶಿಸಿದರು.

ಶೃಂಗೇರಿ ತಾ|| ಸಂಚಾಲಕ ಕೆ. ಎಂ. ಗೋಪಾಲ್ ಮಾತನಾಡಿ, ಅಂಬೇಡ್ಕರ್ ಭಾರತೀಯ ಸಮಾಜದ ಆಂತರಿಕ ಕೊಳೆ ತೊಡೆದು, ಎಲ್ಲರಿಗೂ ಸಮಾನತೆ, ಗೌರವಗಳ ಬದುಕಿಗಾಗಿ ಶ್ರಮ ಪಟ್ಟು, ಜಾತ್ಯಂಧ ಮೂಲಭೂತವಾದಿಗಳೆದುರು ಹತಾಶರಾಗಿ ಬೌದ್ಧ ಧರ್ಮ ಸ್ವೀಕರಿಸುವಂತಾದುದನ್ನು ವಿವರಿಸಿ, ಇಂದೂ ಕೂಡ ಈ ಜಾತ್ಯಂಧತೆ, ದಲಿತ ವಿರೋಧಿ ಮನೋಭಾವ ನಮ್ಮ ಸಮಾಜದಿಂದ ದೂರವಾಗದಿರುವುದರ ಅಪಾಯದ ಬಗ್ಗೆ ಎಚ್ಚರಿಸಿದರು

ಸಿರಿಮನೆ ನಾಗರಾಜ್ ಪ್ರಾಸ್ತಾವಿಕ ಭಾಷಣ ಮಾಡಿದರು. ಕೆ ಎಂ ರಾಮಣ್ಣ ಮತ್ತು ಸಂಗಡಿಗರು ಕ್ರಾಂತಿಗೀತೆಗಳನ್ನು ಹಾಡಿದರು. ಬಿ ರಾಮಪ್ಪ ಸ್ವಾಗತಿಸಿ, ಪಿ. ಶಿವಣ್ಣ ವಂದಿಸಿದರು.

**ಪದಾಧಿಕಾರಿಗಳು**

ನೂತನ ಸಾಲಿಗೆ ದಲಿತ ಸಂಘರ್ಷ ಸಮಿತಿಯ ತಾ|| ಸಂಚಾಲಕರಾಗಿ ಬೇಗಳ್ಳದ ನಾಗಯ್ಯ, ಸಂಘಟನಾ ಸಂಚಾಲಕರಾಗಿ ವಗಳೆಯ ಸಣ್ಣಯ್ಯ, ಖಜಾಂಚಿಯಾಗಿ ಪಿ. ಶಿವಣ್ಣ ಹಾಗೂ 15 ಮಂದಿ ಕಾರ್ಯಕಾರಿ ಸಮಿತಿ ಸದಸ್ಯರು ಆಯ್ಕೆಯಾದರು.

## ಸ್ಟಾರ್ ಸ್ಪೋರ್ಟ್ಸ್‌ನ ಆಹ್ವಾನ ಕ್ರಿಕೆಟ್ ಟೂರ್ನಿ

ಕೊಪ್ಪ : ತೆಂಗಿನಮನೆಯ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್ ಆಶ್ರಯದ ಎ. ಜೆ. ಕುಲಾಸೊ ಸ್ಮಾರಕ ಆಹ್ವಾನ ಕ್ರಿಕೆಟ್ ಟೂರ್ನಿ ಬರುವ ಫೆ. 10 ರಿಂದ 10 ದಿನಗಳ ಕಾಲ ತೆಂಗಿನಮನೆಯ ಸ್ಟಾರ್ ಕ್ರೀಡಾಂಗಣದಲ್ಲಿ ನಡೆಯಲಿದೆ.

## ದಾದಿ ಮೇಲೆ ಅತ್ಯಾಚಾರ ಯತ್ನ: ಮೊಕದ್ದಮೆ

ಕೊಪ್ಪ: ಇಲ್ಲಿನ ಸರ್ಕಾರಿ ಆಸ್ಪತ್ರೆಯ ದಾದಿಯೊಬ್ಬರ ಮೇಲೆ ಅಲ್ಲಿನ ದ್ವಿ. ದ. ಗುಮಾಸ್ತರೊಬ್ಬರು ಅತ್ಯಾಚಾರ ನಡೆಸಲು ಯತ್ನಿಸಿದ ಬಗ್ಗೆ ದಾದಿ ನೀಡಿದ ದೂರಿನ ಮೇರೆಗೆ ಪೋಲೀಸರು ಮೊಕದ್ದಮೆ ದಾಖಲಿಸಿದ್ದು, ಸದರಿ ಗುಮಾಸ್ತರು ನ.ರಾ. ಪುರ ನ್ಯಾಯಾಲಯಕ್ಕೆ ಹಾಜರಾಗಿ ಜಾಮೀನು ಪಡೆದಿರುವುದಾಗಿ ಗೊತ್ತಾಗಿದೆ.

ಇದಲ್ಲದೆ, ವೈದ್ಯಾಧಿಕಾರಿಗಳು ಈ ಬಗ್ಗೆ ಪ್ರಾರಂಭಿಕ ತನಿಖೆ ನಡೆಸಿ, ಆತನನ್ನು ಜಿಲ್ಲಾ ಆರೋಗ್ಯಾಧಿಕಾರಿಗಳ ಕಛೇರಿಗೆ ತಾತ್ಕಾಲಿಕ ರೂಪದ ವರ್ಗಾವಣೆ ಮಾಡಿದ್ದಾರೆ.

## ಬಡವನ ಮನೆಗೆ ಶ್ರಮದಾನದ ಕಾಯಕಲ್ಪ

ಕೊಪ್ಪ : ಇಲ್ಲಿಗೆ ಸಮೀಪದ ಹುಲ್ತಕ್ಕಿಯಲ್ಲಿರುವ ಲಾಟರಿ ಮಾರಾಟಗಾರ ಎ. ವಿ. ಸತ್ಯನಾರಾಯಣ ಅವರ ಮನೆ ಈಚೆಗೆ ಹಠಾತ್ತಾಗಿ ಕುಸಿದು ಬಿದ್ದಿದ್ದು, ತೆಂಗಿನಮನೆಯ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್ ಸದಸ್ಯರು ಅದರ ಅಧ್ಯಕ್ಷ ಅನಿಲ್ ಕುಲಾಸೋ ನೇತೃತ್ವದಲ್ಲಿ ಈಚೆಗೆ ಶ್ರಮದಾನದಿಂದ ಅದೇ ಸ್ಥಳದಲ್ಲಿ ಪುನಃ ಮನೆ ಕಟ್ಟಿ ಕೊಟ್ಟದ್ದಾರೆ. ಮನೆಗೆ ಬೇಕಾಗಿದ್ದ ಹಲವಷ್ಟು ಮರ-ಮಟ್ಟು, ಹಂಚುಗಳನ್ನೂ ಇವರುಗಳೇ ಒದಗಿಸಿದರು.

ಇವರ ಈ ಕಾರ್ಯವನ್ನು ಮೆಚ್ಚಿ ಹಲವಾರು ಮಂದಿ ದಾರಿಹೋಕರು ಸ್ವ-ಇಚ್ಛೆಯಿಂದ ಇವರಿಗೆ ವಂತಿಗೆಯನ್ನೂ ನೀಡಿದರು.

## ಯುವ ಪ್ರತಿಭೆಯನ್ನು ಸಾಕಾರಗೊಳಿಸಿದ ಯುವ ಮೇಳ

ಯುವ ಶಕ್ತಿಯನ್ನು ವಿವಿಧ ಯುವಕ ಸಂಘಗಳು ಮತ್ತು ಯುವತಿ ಮಂಡಳಿಗಳ ಮೂಲಕ ಒಂದೇ ವೇದಿಕೆಗೆ ತಂದು, ಆ ಮೂಲಕ ಅವರಲ್ಲಿ ಹುದುಗಿರುವ ಪ್ರತಿಭೆಯನ್ನು ಹೊರ ಹೊಮ್ಮಿಸುವ ಒಂದು ಸಂದರ್ಭ 'ಯುವ ಮೇಳ'.

ಕಳೆದ ಡಿಸೆಂಬರ್ 29 ರಿಂದ 31ರವರೆಗೆ 3 ದಿನ ಹರಿಹರಪುರದಲ್ಲಿ ನಡೆದ ಕೊಪ್ಪ ತಾ|| ಮಟ್ಟದ ಯುವ ಮೇಳ ಈ ಮಾತನ್ನು ಪೂರ್ತಿ ಸಮರ್ಥಿಸುವಂತಿತ್ತು. ಸುತ್ತ ಹಚ್ಚ ಹಸುರಿನ ವನ ಸಿರಿಯ ನಡುವೆ ಇಲ್ಲಿನ ಕಿರಿಯ ಕಾಲೇಜು ಆವರಣದಲ್ಲಿ ನಡೆದ ಈ ಮೇಳದಿಂದಾಗಿ ಇಡೀ ಊರಿನಲ್ಲಿ ಎಲ್ಲೆಲ್ಲೂ ಲವಲವಿಕೆ, ಉತ್ಸಾಹ ಮೂಡಿ, ಹಬ್ಬದ ಸಡಗರ ಕಂಡುಬಂದಿತು

ರಾಷ್ಟ್ರದ ಚಾಲಕ ಶಕ್ತಿಯಾದ ಯುವ ಶಕ್ತಿ ಇತ್ತೀಚಿನ ವರ್ಷಗಳಲ್ಲಿ ದಿಕ್ಕುತಪ್ಪಿ ಅಪಮಾರ್ಗಕ್ಕೆ ಸರಿಯುತ್ತಿರುವುದಕ್ಕೆ ಸಾಕ್ಷಿಯಾಗಿ, ಯುವ ಮೇಳಗಳೂ ಸಹ ಎಲ್ಲೆಡೆ ಗೊಂದಲ, ಅಶಿಸ್ತು, ಮನಸ್ತಾಪಗಳೊಂದಿಗೆ ಪರ್ಯವಸಾನವಾಗುವುದನ್ನು ನೋಡುತ್ತಿದ್ದೇವೆ. ಆದರೆ ಇಲ್ಲಿನ ಈ ಮೇಳ ಇದಕ್ಕೆ ತೀರ ವ್ಯತಿರಿಕ್ತವಾಗಿ, ಶಿಸ್ತು, ಶಾಂತಿ, ಸಹಕಾರ, ಸಭ್ಯತೆಯುಳ್ಳದ್ದಾಗಿ, ಒಂದು ರಚನಾತ್ಮಕ ಕಾರ್ಯಕ್ರಮವಾಗಿ ನಡೆಯಿತು. (ತೀರ್ಥ ಪುಟಕ್ಕೆ)

## ರೋಗಿಗಳಿಗೆ ಹಣ್ಣು ನೀಡಿಕೆ

ಕೊಪ್ಪ : ಇಲ್ಲಿನ ರೋಟರ್‍ಯಾಕ್ಟ್ ಕ್ಲಬ್ ಸದಸ್ಯರು ಹೊಸ ವರ್ಷದ ಮೊದಲ ದಿನ ಸ್ಥಳೀಯ ಆಸ್ಪತ್ರೆಯ ರೋಗಿಗಳಿಗೆ ಶೀಘ್ರ ಗುಣಮುಖರಾಗುವಂತೆ ಶುಭಾಶಯ ಕೋರಿ ಹಣ್ಣು ಮತ್ತು ಬ್ರೆಡ್ ನೀಡಿದರು. ಆಸ್ಪತ್ರೆಯ ಎಲ್ಲ ವೈದ್ಯಾಧಿಕಾರಿಗಳೂ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಅಂಚೆ ನೌಕರರ ಸಂಘದ ಸಂಘಟನಾ ಸಭೆ

ಕೊಪ್ಪ : ಅಂಚೆ ನೌಕರರ ಸಂಘದ (ಎನ್.ಎಫ್.ಪಿ.ಇ.) ಚಿಕ್ಕಮಗಳೂರು ವಿಭಾಗ ಮಟ್ಟದ ಸಂಘಟನಾ ಸಭೆ ಇಲ್ಲಿ ಈಚೆಗೆ ವಿಭಾಗ ಅಧ್ಯಕ್ಷ ಫಾಲಾಕ್ಷಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಂಘದ 4ನೇ ವರ್ಗದ ನೌಕರರ ವಿಭಾಗ ಅಧ್ಯಕ್ಷ ಪುಂಡಲೀಕ ರಾವ್ ಅವರೂ ಸಭೆಯಲ್ಲಿ ಭಾಗವಹಿಸಿದ್ದರು. ಕರ್ನಾಟಕ ವಲಯ ಕಾರ್ಯದರ್ಶಿಗಳೂ ಜೆ.ಸಿ.ಎಂ. ಸದಸ್ಯರೂ ಆದ ಆರ್. ಜಿ. ಸವಣೂರ್ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಕೆ.ಎಸ್. ಕೃಷ್ಣಮೂರ್ತಿ, ಕೆ.ಎಸ್. ಅನಂತರಾವ್, ಬಿ. ಕೃಷ್ಣರಾವ್ ಅವರೂ ಮಾತನಾಡಿದರು.

# ಹರಿಹರಪುರ ಯುವಜನ ಮೇಳ

(ಒಂದನೇ ಪುಟದಿಂದ)

ಯುವ ಮೇಳದ ಪ್ರಮುಖ ಆಕರ್ಷಣೆಯೆಂದರೆ ಹಲವು ಹತ್ತು ಬಗೆಯ ಜಾನಪದ ಕಲೆಗಳ ರಸದೌತಣ. ಇಂದಿನ ಪಾಶ್ಚಾತ್ಯ ಸಂಸ್ಕೃತಿಯ ವಿಕೃತ ಅನುಕರಣೆ ಮತ್ತು ಸಿನಿಮಾರಂಗದ ಅನಾರೋಗ್ಯಕರ ಪ್ರಭಾವದಿಂದ ಅಳಿವಿನ ದಾರಿ ಹಿಡಿದಿರುವ ಸಮೃದ್ಧ ಜಾನಪದ ಕಲೆಗಳಿಗೆ ಈ ಯುವ ಮೇಳಗಳು ಸಂಜೀವಿನಿಯಾಗಬಲ್ಲವೆಂಬುದಕ್ಕೆ, ಹಾಗೂ ಸೂಕ್ತ ಪ್ರೋತ್ಸಾಹ ಮತ್ತು ಮಾರ್ಗದರ್ಶನಗಳು ಲಭಿಸಿದರೆ ಈ ಗ್ರಾಮೀಣ ಪ್ರತಿಭಾವಂತರು ನಗರಗಳ ಯುವ ಜನತೆಗೂ ಮೇಲ್ಪಂಕ್ತಿಯಾಗಬಲ್ಲರೆಂಬುದಕ್ಕೆ ಈ ಯುವ ಮೇಳ ಒಂದು ಉದಾಹರಣೆಯಂತಿತ್ತು.

● ಡಾ|| ಎಚ್.ಜಿ. ಶೇಷಗಿರಿ

ಜಾನಪದ ನೃತ್ಯ, ಕೋಲಾಟ, ಗೀಗೀ ಪದ, ಸುಗ್ಗಿಯ ಹಾಡು, ಸೋಬಾನೆ ಪದ, ಬೀಸೋ ಕಲ್ಲಿನ ಪದ ಮುಂತಾದ ಅಮೂಲ್ಯ ಮತ್ತು ಅಪರೂಪದ ಕಲೆಗಳಿಗೆ ಈ ಯುವ ಜನರು ಜೀವ ತುಂಬಿ ಪ್ರದರ್ಶಿಸಿದರು. ಭಾವಗೀತೆ, ನಾಟಕ, ಯಕ್ಷಗಾನ ಮುಂತಾದುವುಗಳಲ್ಲಂತೂ ವೃತ್ತಿ ಕಲಾವಿದರಿಗೂ ಸವಾಲು ಹಾಕುವಷ್ಟು ಹಾಗೂ ಕೆಲವೊಮ್ಮೆ ತೀರ್ಪುಗಾರರಿಗೇ ಸಂದಿಗ್ಧವಾಗುವಷ್ಟು ಉತ್ತಮ ಪ್ರದರ್ಶನ ಮೂಡಿಬಂತು. ಇಂಥದೇ ಉತ್ಸಾಹ, ಶಿಸ್ತುಗಳನ್ನು ಮುಂದೆಯೂ ಉಳಿಸಿಕೊಂಡು, ಈ ಕಲೆಗಳನ್ನು ರಾಷ್ಟ್ರ-ಅಂತರ ರಾಷ್ಟ್ರ ಮಟ್ಟಕ್ಕೆ ಕೊಂಡೊಯ್ಯುವ ಹೊಣೆಯೂ ಈ ಯುವ ಜನರ ಮೇಲಿದೆ.

ಹಳ್ಳಿಗಾಡುಗಳ ಈ ಯುವಜನ ತಮ್ಮ ಕೃಷಿ ಕಾರ್ಯ ಮತ್ತು ಮನೆ ಕೆಲಸಗಳ ಬಿಡುವಿಲ್ಲದ ದುಡಿಮೆಯ ನಡುವೆಯೂ ಬಿಡುವು ಮಾಡಿಕೊಂಡು, ಒಂದೆಡೆ ಸೇರಿ, ಇಂಥ ಸಾಧನೆ ಮಾಡಿರುವುದನ್ನು ಎಷ್ಟು ಮೆಚ್ಚಿ ಅಭಿನಂದಿಸಿದರೂ ಕಡಿಮೆಯೇ. ಇಂಥ ಸುಂದರ, ಸ್ಮರಣೀಯ ಅನುಭವದ ಮುಂದೆ, ಆಕಸ್ಮಾತ್ ನುಸುಳಿರಬಹುದಾದ ಕೆಲವು ಸಣ್ಣ ಪುಟ್ಟ ದೋಷಗಳು ಖಂಡಿತಾ ಅಗಣ್ಯವೆನ್ನಿಸಿಕೊಳ್ಳುತ್ತವೆ.

16 ಯುವಕ ಸಂಘಗಳು ಹಾಗೂ 11 ಯುವತಿ ಮಂಡಳಿಗಳಿಂದ ಸುಮಾರು 400 ಮಂದಿ ಸ್ಪರ್ಧಿಗಳಲ್ಲದೆ ಕಾರ್ಯಕರ್ತರು, ಸಿಬ್ಬಂದಿ ವರ್ಗದವರು ಮುಂತಾಗಿ 500ಕ್ಕೂ ಹೆಚ್ಚು ಜನ ಈ ಯುವ ಮೇಳದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು.

ಇಂಥ ಯಶಸ್ವೀ ಕಾರ್ಯಕ್ರಮಕ್ಕೆ ಕಾರಣಕರ್ತರಾದ ತಾ|| ಯುವಜನ ಒಕ್ಕೂಟ ಹಾಗೂ ಯುವಜನ ಸೇವಾ ಇಲಾಖೆಯವರು ಮತ್ತು ಇತರ ಅಧಿಕಾರಿಗಳು, ವಿವಿಧ ಸಂಘ-ಸಂಸ್ಥೆಗಳು, ಅಧ್ಯಾಪಕ ಮಿತ್ರರು, ಸ್ಥಳೀಯ ಅಭಿಮಾನಿಗಳು ಹಾಗೂ ಹರಿಹರಪುರ ಮಠಾಧೀಶರು-ಇವರೆಲ್ಲರಿಗೆ ತಾಲ್ಲೂಕಿನ ಎಲ್ಲ ಯುವಜನಸಂಘಗಳ ಹಾಗೂ ಹರಿಹರಪುರ ಮತ್ತು ಸುತ್ತಮುತ್ತಲ ಹತ್ತಾರು ಹಳ್ಳಿಗಳವರ ತುಂಬು ಹೃದಯದ ಕೃತಜ್ಞತೆಗಳು ಸಲ್ಲುತ್ತವೆ.

## ಕ.ವಿ.ಮಂ.ನೌಕರರ ಸಂಘದ ಪದಾಧಿಕಾರಿಗಳು

ಕೊಪ್ಪ: ಕ.ವಿ.ಮಂ. ನೌಕರರ ಸಂಘದ ಕೊಪ್ಪ-ನ.ರಾ. ಪುರ ಪ್ರಾಥಮಿಕ ಶಾಖೆಗೆ ಈ ಕೆಳಕಂಡವರು ನೂತನ ಪದಾಧಿಕಾರಿಗಳಾಗಿ ಆಯ್ಕೆಯಾಗಿದ್ದಾರೆ: ಮರಿಸಿದ್ಧಯ್ಯ, ಮೆಕ್ಯಾನಿಕ್, ನ.ರಾ ಪುರ (ಅಧ್ಯಕ್ಷರು), ರಾಜಯ್ಯ, ಮೀಟರ್ ರೀಡರ್, ಕೊಪ್ಪ (ಕಾರ್ಯದರ್ಶಿ). ಕೆ.ಎನ್.ನಾರಾಯಣ, ಎಚ್.ಎಂ. ಕೃಷ್ಣಾಚಾರ್, ಮಹಾದೇವ, ಮುನೀರ್ ಮತ್ತು ಮುನಾಫ್ (ಸದಸ್ಯರು).

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 4-1-1990

| | |
|---|---|
| ಸರಕು | 3400-4000 |
| ಬೆಟ್ಟೆ | 2500-2980 |
| ಗೊರಬಲು | 1800-2030 |

ಸಾಗರ : 2.1.1990

| | |
|---|---|
| ಇಡಿ | 2300-2750 |
| ಚಾಲಿ | 2300-2700 |
| ಆಪಿ | 3500-4100 |
| ಸಿಪ್ಪೆ ಗೋಟು | 1000-1200 |



# ಹರಿಹರಪುರ ಕಿರಿಯ ಕಾಲೇಜು ವಿದ್ಯಾರ್ಥಿಗಳ ಸಾಧನೆ

ಹರಿಹರಪುರ : ಶಿಪಟೂರಿನಲ್ಲಿ ಈಚೆಗೆ ನಡೆದ ರಾಜ್ಯ ಮಟ್ಟದ ರಸಪ್ರಶ್ನೆ ಸ್ಪರ್ಧೆಯಲ್ಲಿ ಇಲ್ಲಿನ ಅ. ರಾ. ಸ. ಕಿರಿಯ ಕಾಲೇಜಿನ ಕೆ. ಎನ್. ಅನಿಲ್ ಕುಮಾರ್ ಮೊದಲನೆಯ ಹಾಗೂ ಟಿ. ಕೆ. ಸುಧೀಂದ್ರ ಎರಡನೆಯ ಸ್ಥಾನವನ್ನು ಗಳಿಸಿ, ಕಾಲೇಜಿಗೆ ಪರ್ಯಾಯ ಪಾರಿತೋಷಕವನ್ನು ಗೆದ್ದು ತಂದಿದ್ದಾರೆ. ಚರ್ಚಾ ಕೂಟದಲ್ಲಿ ಮೆಚ್ಚುಗೆ ಬಹುಮಾನವನ್ನೂ ಗೆದ್ದಿರುವುದಲ್ಲದೆ, ಭಾವಗೀತೆ ಸ್ಪರ್ಧೆಯಲ್ಲಿ ಬಿ. ಪ್ರಕಾಶ ತೀರ್ಪುಗಾರರ ಮೆಚ್ಚುಗೆ ಗಳಿಸಿದ್ದಾನೆ.

ಡಿ. 28 ರಂದು ಬಾಳೆಹೊನ್ನೂರಿನಲ್ಲಿ ನಡೆದ ಅಂತರ ಕಾಲೇಜು/ಪ್ರೌಢಶಾಲೆ ಸ್ಪರ್ಧೆಗಳಲ್ಲಿ ಕೆ. ಎನ್. ಸೀತಾಲಕ್ಷ್ಮಿ ಭಾವಗೀತೆಯಲ್ಲಿ ಮೊದಲ ಸ್ಥಾನದೊಂದಿಗೆ ಪರ್ಯಾಯ ಫಲಕ ಗೆದ್ದರೆ, ಚರ್ಚಾಸ್ಪರ್ಧೆಯಲ್ಲಿ ಪ್ರೌಢಶಾಲೆಯ ಬಿ. ಟಿ. ಶಕುಂತಲ ಮತ್ತು ಎ. ಎಸ್. ಬೀಡು ಮೆಚ್ಚುಗೆ ಬಹುಮಾನ ಗಳಿಸಿದರು.

ದಕ್ಷಿಣ ಕನ್ನಡದ ಸುಬ್ರಹ್ಮಣ್ಯದಲ್ಲಿ ಹತ್ತು ದಿನಗಳ ಕಾಲ ನಡೆದ ಪದವಿ ಪೂರ್ವ ಕಾಲೇಜು ವಿದ್ಯಾರ್ಥಿನಿಯರ ವಿಶೇಷ ರಾಷ್ಟ್ರೀಯ ಸೇವಾ ಯೋಜನೆ ಶಿಬಿರದಲ್ಲಿ ಪಾಲ್ಗೊಂಡಿದ್ದ ಕು|| ಸುಧಾಮಣಿ ಏಕ ಪಾತ್ರಾಭಿನಯದಲ್ಲಿ ದ್ವಿತೀಯ ಸ್ಥಾನ ಗಳಿಸಿದ್ದಲ್ಲದೆ, ಒರಿಸ್ಸಾದಲ್ಲಿ ನಡೆಯಲಿರುವ ರಾಷ್ಟ್ರ ಮಟ್ಟದ ರಾ.ಸೇ.ಯೋ. ಶಿಬಿರಕ್ಕೂ ಆಯ್ಕೆ ಹೊಂದಿದ್ದಾರೆ.

## ಶೃಂಗೇರಿ ತಾಲ್ಲೂಕು ಯುವಜನ ಒಕ್ಕೂಟ

ಶೃಂಗೇರಿ : ತಾಲ್ಲೂಕು ಯುವಜನ ಒಕ್ಕೂಟದ ಸಭೆ ಡಿ. 30ರಂದು ನಡೆದು ನೂತನ ಸಾಲಿಗೆ ಈ ಕೆಳಕಂಡವರು ಪದಾಧಿಕಾರಿಗಳಾಗಿ ಆಯ್ಕೆಯಾದರು : ಎಸ್. ಆರ್. ಚಂದ್ರಶೇಖರ್ (ಅಧ್ಯಕ್ಷ), ಕು|| ಮಮತಾ ಮತ್ತು ವೆಂಕಟೇಶ್ (ಉಪಾಧ್ಯಕ್ಷರು), ಎಂ. ಸಿ. ಅಚ್ಯುತ (ಕಾರ್ಯದರ್ಶಿ) ಮೋಹನ್ (ಸಹ ಕಾರ್ಯದರ್ಶಿ), ಅಶೋಕ ಹೆಗ್ಡೆ (ಖಜಾಂಚಿ), ಜಮಾಲ್ ಸಾಹೇಬ್ (ಸಾಂಸ್ಕೃತಿಕ ಕಾರ್ಯದರ್ಶಿ), ರಾಮಮೂರ್ತಿ ಮತ್ತು ರತ್ನಾಕರ್ (ಸಂಘಟನಾ ಕಾರ್ಯದರ್ಶಿಗಳು) ಹಾಗೂ ಗಾಳಿತೋಟ [illegible]ಶಂಕರ್ (ಸಂಚಾಲಕ) ಅಲ್ಲದೆ ಐವರು [illegible] ಮಂಡಲಿ ಸದಸ್ಯರು.

## ವಿನಾಯಕ ಯು| ಸಂಘಕ್ಕೆ ಪ್ರಶಸ್ತಿಗಳು

ಅಗಳಗಂಡಿ : ಇಲ್ಲಿನ ವಿನಾಯಕ ಯುವಕ ಸಂಘದವರು ಹರಿಹರಪುರ ಯುವಜನ ಮೇಳದಲ್ಲಿ ಕೋಲಾಟ ಮತ್ತು ವೀರಗಾಸೆಯಲ್ಲಿ ಮೊದಲ ಸ್ಥಾನವನ್ನೂ, ಗೀಗೀ ಪದ ಮತ್ತು ಲಾವಣಿಯಲ್ಲಿ ಎರಡನೇ ಸ್ಥಾನವನ್ನೂ ಪಡೆದಿದ್ದಲ್ಲದೆ, ಹಲವಾರು ವೈಯಕ್ತಿಕ ಮತ್ತು ಸಮಾಧಾನಕರ ಬಹುಮಾನಗಳನ್ನೂ ಗಳಿಸಿದ್ದಾರೆ.

(ಕೆ. ಕಾರಿಯಪ್ಪ)

'ಮುಂಜಾವು' ಚಂದಾ ಹಣ ಕಳಿಸಿ

ಸ ಹ ಕ ರಿ ಸಿ

**ವಾರ್ಷಿಕ ಚಂದಾ : ರೂ. 35-00**



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ, ಸಿರಿಮನೆ ನಾಗರಾಜ್, ಅಚ್ಚು : ದೀಪಟಿಗೆ ಅಚ್ಚು ಕೂಟ, ಕೊಪ್ಪ.